# ಮುಂಜಾವು

ವಾರಪತ್ರಿಕೆ.

ಸಂಪಾದಕ: ಶಿರಿಮನೆ ನಾಗರಾಜ್

'MUNJAVU' Kannada Weekly, KOPPA-CHM. ಫೋನ್ : 114

೩ನೇ ವರ್ಷ 16ನೇ ಸಂಚಿಕೆ ಕೊಪ್ಪ 10-12-1989 ಭಾನುವಾರ ಬೆಲೆ 60 ಪೈಸೆ


## ರಾಷ್ಟ್ರೀಯ ಗ್ರಾ. ಕ್ರೀಡಾಕೂಟಕ್ಕೆ ಮೀನಾಕ್ಷಿ

ಕೊಪ್ಪ : ಇಲ್ಲಿನ, ಸರ್ಕಾರಿ ಪ್ರೌಢ ಶಾಲೆಯ 9ನೇ ತರಗತಿಯ ವಿದ್ಯಾರ್ಥಿನಿ ಮೀನಾಕ್ಷಿ ಬೆಂಗಳೂರಲ್ಲಿ ಕಳೆದ ವಾರ ನಡೆದ ರಾಜ್ಯ ಗ್ರಾಮೀಣ ಕ್ರೀಡಾಕೂಟದಲ್ಲಿ ಜಾವೆಲಿನ್ ಎಸೆತದಲ್ಲಿ 2ನೇ ಸ್ಥಾನ ಪಡೆದು, ಧಾರವಾಡದಲ್ಲಿ ಡಿ. 14ರಿಂದ ನಡೆಯುವ ರಾಷ್ಟ್ರೀಯ ಕೂಟಕ್ಕೆ ಆಯ್ಕೆಯಾಗಿದ್ದಾಳೆ.

ಈ ಕೂಟಕ್ಕೆ ಪೂರ್ವಭಾವಿಯಾಗಿ ಡಿ. 9 ರಿಂದ 14ರವರೆಗೆ ನಡೆಯಲಿರುವ ರಾಜ್ಯ ತಂಡದ ತರಬೇತಿ ಶಿಬಿರದಲ್ಲಿ ಭಾಗವಹಿಸಲು ತೆರಳಿದ ಮೀನಾಕ್ಷಿಯನ್ನು ಡಿ. 8 ರಂದು ಶಾಲೆಯಲ್ಲಿ ಶುಭ ಹಾರೈಸಿ ಬೀಳ್ಕೊಡಲಾಯಿತು.

ಪ್ರಿನ್ಸಿಪಾಲ್ ಎನ್. ಮೋಹನದಾಸ್ ಭಟ್ ಅಧ್ಯಕ್ಷತೆಯಲ್ಲಿ ನಡೆದ ಈ ಸಮಾರಂಭದಲ್ಲಿ ಡಾ| ಶಾನಭಾಗ್ ಮತ್ತು ಶಿರಿಮನೆ ನಾಗರಾಜ್ ಅತಿಥಿಗಳಾಗಿದ್ದು, ಈ ಉದಯೋನ್ಮುಖ ಕ್ರೀಡಾಪಟುವಿಗೆ ಶುಭ ಹಾರೈಸಿದರು. ದೈಹಿಕ ಶಿಕ್ಷಕ ಎಚ್. ಎ. ಗೋಪಾಲ್ ಕಾರ್ಯಕ್ರಮ ನಿರ್ವಹಿಸಿದರು.

ಬೆಂಗಳೂರಿನಲ್ಲಿ ನಡೆದ ರಾಜ್ಯ ಕೂಟಕ್ಕೆ ಶಾಲೆಯಿಂದ ಮೀನಾಕ್ಷಿಯಲ್ಲದೆ ರಾಜು, ರಮೇಶ್, ಸೈಯದ್ ಬಾಶಾ ಇವರುಗಳೂ ತೆರಳಿದ್ದು, ಇವರುಗಳ ಪ್ರಯಾಣಕ್ಕಾಗಿ ಮತ್ತು ಮೀನಾಕ್ಷಿಯ ಪ್ರಸಕ್ತ ಪ್ರಯಾಣಕ್ಕಾಗಿ ಉದಾರವಾಗಿ ನೆರವು ನೀಡಿದ ಕೊಪ್ಪದ ಕ್ರೀಡಾಭಿಮಾನಿ ಸಾರ್ವಜನಿಕರಿಗೆ ಪ್ರಿನ್ಸಿಪಾಲರು ಕೃತಜ್ಞತೆ ಸಲ್ಲಿಸಿದ್ದಾರೆ.

# ನ. ರಾ. ಪುರದಲ್ಲಿ ಗಂಧ ಕಳ್ಳರಿಂದ ತೀವ್ರ ಹಲ್ಲೆಗೊಳಗಾದ ಗಾರ್ಡ್, ರೇಂಜರ್ ಮಣಿಪಾಲ ಆಸ್ಪತ್ರೆಗೆ

**ನ. ರಾ. ಪುರ : ಗಂಧದ ಕಳ್ಳನೊಬ್ಬ ಕತ್ತಿಯಿಂದ ಕಡಿದು ತೀವ್ರವಾಗಿ ಗಾಯಗೊಳಿಸಿದ್ದ ಚಿಕ್ಕಗ್ರಹಾರ ವಲಯ ಅರಣ್ಯಾಧಿಕಾರಿ ಲಕ್ಷ್ಮೀನಾರಾಯಣ್ ಮತ್ತು ಗಾರ್ಡ್ ಬಸವರಾಜ್ ಇವರನ್ನು ಚಿಕಿತ್ಸೆಗಾಗಿ ಮಣಿಪಾಲ ಆಸ್ಪತ್ರೆಗೆ ಸೇರಿಸಲಾಗಿದ್ದು, ಅವರೀಗ ಚೇತರಿಸಿಕೊಳ್ಳುತ್ತಿದ್ದಾರೆಂದು ತಿಳಿದು ಬಂದಿದೆ.**

ಬಿ ಎಚ್. ಕೈಮರ ಸಮೀಪ ಜೋನಿ ಎಂಬವನ ಮನೆಯಲ್ಲಿ ಬಚ್ಚಿಡಲಾಗಿದ್ದ ಗಂಧವನ್ನು ವಶಪಡಿಸಿಕೊಳ್ಳುವ ಯತ್ನದಲ್ಲಿ ಡಿ. 6ರಂದು ನಡೆದ ಈ ಘಟನೆಯಲ್ಲಿ ಕಟ್ಟಿನಮನೆ ಫಾರೆಸ್ಟರ್ ಕೃಷ್ಣಮೂರ್ತಿ ಪ್ರಾಣಾಂತಿಕವಾಗಬಹುದಾಗಿದ್ದ ಪೆಟ್ಟಿನಿಂದ ಆಶ್ಚರ್ಯಕರ ರೀತಿಯಲ್ಲಿ ತಪ್ಪಿಸಿಕೊಂಡರೂ, ಅಲ್ಪ ಸ್ವಲ್ಪ ಗಾಯಗಳೊಂದಿಗೆ ಸ್ಥಳೀಯ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯಬೇಕಾಯಿತು.

### ಪರಾಕ್ರಮಿ ರೇಂಜರ್, ಗಾರ್ಡ್

ರೇಂಜರ್ ಮೇಲೆ ಬೀಸಿದ ಕತ್ತಿ ಏಟನ್ನು ತಪ್ಪಿಸಲೆತ್ನಿಸಿದ ಗಾರ್ಡ್ ಬಸವರಾಜ್ ಅವರ ಕೈಯ 3 ಬೆರಳುಗಳು ತುಂಡಾಗಿ ಜೋತಾಡತೊಡಗಿದವು. ಲಕ್ಷ್ಮೀನಾರಾಯಣ್‌ಗೂ ತೀವ್ರ ಏಟುಗಳು ಬಿದ್ದವು ಆದರೆ, ರಕ್ತ ಹರಿಯುತ್ತಿದ್ದರೂ ಲೆಕ್ಕಿಸದ ಪರಾಕ್ರಮಿ ಲಕ್ಷೀನಾರಾಯಣ್ ಗಾರ್ಡ್ ಸಹಾಯದಿಂದ ಜೋನಿಯನ್ನು ಕಟ್ಟಿಹಾಕಿ, ನ. ರಾ. ಪುರಕ್ಕೆ ತಂದು, ಪೋಲೀಸರಿಗೆ ಒಪ್ಪಿಸಿದರು. ಅನಂತರ ಅವನನ್ನು ನ್ಯಾಯಾಂಗ ಬಂಧನಕ್ಕೊಳಪಡಿಸಲಾಯಿತು.

ಜೋನಿಯ ಮನೆಯಿಂದ ಸುಮಾರು 50 ಸಾವಿರ ರೂ. ಬೆಲೆಯ 464 ಕಿಲೋ ಗಂಧ ಮತ್ತು 26 ಡಬ್ಬಿ ಜೇನುತುಪ್ಪ ವಶಪಡಿಸಿಕೊಳ್ಳಲಾಗಿದೆ. ಕಳೆದ ವರ್ಷ ಗಂಧ ಸಾಗಣೆಯ ದೊಡ್ಡ ಪ್ರಕರಣವೊಂದರಲ್ಲಿ ಸಿಕ್ಕಿ ಬಿದ್ದಿದ್ದ ಇರಾನ್ ಜೋಸ್‌ನೇ ಇವುಗಳನ್ನು ನೆಪಕ್ಕೆ ರೈತನಾಗಿರುವ ಈ ಜೋನಿಯ ಮನೆಯಲ್ಲಿ ಸಂಗ್ರಹಿಸಿದ್ದನೆಂದು ನಂಬಲಾಗಿದೆ. ತನಿಖೆ ಮುಂದುವರಿಯುತ್ತದೆ

### ಪ್ರಥಮ ಚಿಕಿತ್ಸೆ ತರಬೇತಿ ಶಿಬಿರ

ಹರಿಹರಪುರ : ಇಲ್ಲಿನ ರೋಟರಿ ಗ್ರಾಮೀಣ ದಳದ ಆಶ್ರಯದಲ್ಲಿ ಸದ್ಯದಲ್ಲೇ ಪ್ರಥಮ ಚಿಕಿತ್ಸಾ ತರಬೇತಿ ಶಿಬಿರವನ್ನು ಏರ್ಪಡಿಸಲಾಗುವುದು. ಆಸಕ್ತರು ಕೂಡಲೇ ಎ.ಎನ್. ಸೇರಿಗಾರ್, ಕೇರಾಫ್ ಸಿಂಡಿಕೇಟ್ ಬ್ಯಾಂಕ್, ಹರಿಹರಪುರ – ಇವರನ್ನು ಸಂಪರ್ಕಿಸಲು ಕೋರಲಾಗಿದೆ.

## 'ಕಪ್ಪು ಹಲಗೆ ಕಾರ್ಯಾಚರಣೆ' ಯೋಜನೆಯಲ್ಲಿ ಕೊಪ್ಪ ತಾ||ಗೆ 29 ಲಕ್ಷ ರೂ. ಮಂಜೂರು

ಕೊಪ್ಪ: ಕೇಂದ್ರ ಸರ್ಕಾರದ 'ಕಪ್ಪು ಹಲಗೆ ಕಾರ್ಯಾಚರಣೆ' ಯೋಜನೆಯಲ್ಲಿ ಕೊಪ್ಪ ತಾಲ್ಲೂಕಿಗೆ 29,30,500 ರೂ. ಮಂಜೂರಾಗಿದ್ದು, ತಕ್ಷಣದಲ್ಲಿ 10 ಲಕ್ಷ ರೂ. ಬಿಡುಗಡೆ ಮಾಡಲಾಗಿದೆ ಎಂದು ವರದಿಯಾಗಿದೆ.

'ಈ ಯೋಜನೆಯಂತೆ ಒಂದೇ ಕೊಠಡಿ ಇರುವ ತಾಲ್ಲೂಕಿನ ಎಲ್ಲ ಏಕೋಪಾಧ್ಯಾಯ ಶಾಲೆಗಳಿಗೂ ಇನ್ನೊಂದು ಕೊಠಡಿ ನಿರ್ಮಾಣ ಮತ್ತು ಇನ್ನೊಬ್ಬ ಅಧ್ಯಾಪಕರ ನೇಮಕ ಆಗಲಿದೆ. ಒಟ್ಟು 53 ಕೊಠಡಿಗಾಗಿ 15,86,000 ರೂ ಗಳೂ, 61 ಜನ ಹೆಚ್ಚುವರಿ ಶಿಕ್ಷಕರ ಸಂಬಳಕ್ಕಾಗಿ 7 ಲಕ್ಷದ 93 ಸಾವಿರ ರೂ.ಗಳೂ, ಕಲಿಕೆ ಸಾಮಾಗ್ರಿ ಮತ್ತು ಪೀಠೋಪಕರಣಗಳಿಗಾಗಿ 5 ಲಕ್ಷದ 51 ಸಾವಿರದ 500 ರೂ.ಗಳೂ ಮಂಜೂರಾಗಿವೆ.

### ಶೃಂಗೇರಿ ಕ್ಷೇತ್ರಕ್ಕೆ 364 ಜನತಾ ಮನೆ

ಕೊಪ್ಪ : ಈ ಸಾಲಿನಲ್ಲಿ ಜನತಾ ವಸತಿ ಯೋಜನೆಯಡಿ ಚಿಕ್ಕಮಗಳೂರು ಜಿಲ್ಲೆಗೆ 2057 ಮನೆಗಳು ಮಂಜೂರಾಗಿದ್ದು, ಈ ಪೈಕಿ ಶೃಂಗೇರಿ ತಾಲ್ಲೂಕಿಗೆ 88, ಕೊಪ್ಪಕ್ಕೆ 229 ಮತ್ತು 'ನ. ರಾ ಪುರಕ್ಕೆ 47 ಮನೆಗಳು ದೊರಕಲಿವೆ.

ಪ್ರತಿಮನೆಗೆ 8,000 ರೂ. ನಿಗದಿಯಾಗಿದೆ ಅದರಲ್ಲಿ 'ಹುಡ್ಕೊ' 4000 ರೂ.ಗಳನ್ನೂ, ಬ್ಯಾಂಕ್ ನೆರವು ಮೂಲಕ 2,500 ರೂ. ಗಳನ್ನೂ ಒದಗಿಸಲಿದ್ದು, ಮಿಕ್ಕ 1,500 ರೂ.ಗಳನ್ನು ಫಲಾನುಭವಿಗಳು ವಂತಿಗೆ ರೂಪದಲ್ಲಿ ಕೊಡಬೇಕಾಗುತ್ತದೆ.

### ಜಿಲ್ಲಾ ವರದಿಗಾರರ ಒಕ್ಕೂಟ ಅಸ್ತಿತ್ವಕ್ಕೆ

ಚಿಕ್ಕಮಗಳೂರು : ಪತ್ರಿಕೋದ್ಯಮದ ಬಗ್ಗೆ ಹಲವು ಆಶೋತ್ತರಗಳನ್ನು ಹೊಂದಿರುವ ಜಿಲ್ಲಾ ವರದಿಗಾರರ ಒಕ್ಕೂಟ ಡಿ. 3 ರಂದು ಅಸ್ತಿತ್ವಕ್ಕೆ ಬಂದಿತು. ನಗರದ ಪ್ರವಾಸಿ ಮಂದಿರದಲ್ಲಿ ಸೇರಿದ್ದ ಜಿಲ್ಲೆಯ 20 ಕ್ಕೂ ಹೆಚ್ಚು ಮಂದಿ ಯುವ ಪತ್ರಕರ್ತರು ಒಕ್ಕೂಟದ ರೂಪುರೇಷೆಗಳನ್ನು ಚರ್ಚಿಸಿ ಸಿದ್ಧಪಡಿಸಿದರು

ಒಕ್ಕೂಟದ ಜಿಲ್ಲಾ ಸಮಿತಿ ಕೆಳಗಿನಂತಿದೆ: ದಿನೇಶ್ ಪಟವರ್ಧನ್ (ಅಧ್ಯಕ್ಷರು), ಕಿಂ. ಕ. ಮೂರ್ತಿ (ಕಾರ್ಯದರ್ಶಿ), ಸಿ. ಕೆ. ಮೂರ್ತಿ (ಖಜಾಂಚಿ), ಸಂಚಾಲಕರುಗಳು : ಎಚ್. ಆರ್. ಪ್ರಸಾದ್ (ಚಿಕ್ಕಮಗಳೂರು). ಎನ್. ಆರ್. ರಾಜು (ತರೀಕೆರೆ), ಕೆ. ವಿ ವಾಸು (ಕಡೂರು), ಕೆರಗುಂದ ನಜೀರ್ (ಮೂಡಿಗೆರೆ), ಸಿ ಎಸ್. ಸೋಜೇಗೌಡ (ಆಲ್ದೂರು), ನಾರಣಾಪುರ ಚಂದ್ರಶೇಖರ್ (ಗ್ರಾಮಾಂತರ).

ಒಕ್ಕೂಟವನ್ನು ಜನವರಿ ಮೊದಲ ವಾರದಲ್ಲಿ ವಿಧ್ಯುಕ್ತವಾಗಿ ಉದ್ಘಾಟಿಸಲು ಮತ್ತು ಅದೇ ದಿನ ಪತ್ರಿಕೋದ್ಯಮ ವಿಚಾರ ಸಂಕಿರಣವೊಂದನ್ನು ಏರ್ಪಡಿಸಲು ನಿರ್ಧರಿಸಲಾಗಿದೆ. ಒಕ್ಕೂಟಕ್ಕೆ ಸೇರ ಬಯಸುವ ಜಿಲ್ಲೆಯ ವರದಿಗಾರರು ಮತ್ತು ಪತ್ರಿಕಾ ಲೇಖಕರು ಕೆಳಗಿನ ವಿಳಾಸಕ್ಕೆ ಸಂಪರ್ಕಿಸಲು ಕೋರಿದೆ : ದಿನೇಶ್ ಪಟವರ್ಧನ್, ಕೇರಾಫ್ ಜನಮಿತ್ರ ದಿನಪತ್ರಿಕೆ, ಚಿಕ್ಕಮಗಳೂರು. ಕಿಂ. ಕ ಮೂರ್ತಿ, ಕೇರಾಫ್ 'ಮಲೆನಾಡು ಸಂಗತಿ' ದಿನಪತ್ರಿಕೆ, ಚಿಕ್ಕಮಗಳೂರು.

### ವ್ಯ.ಸೇ.ಸ. ಸಂಘ ಅಧ್ಯಕ್ಷರಾಗಿ ಎಸ್. ಪಿ. ಚಂದ್ರಶೇಖರ್

ಕೊಪ್ಪ: ಇಲ್ಲಿನ ವ್ಯವಸಾಯ ಸೇವಾ ಸಹಕಾರ ಸಂಘದ ಅಧ್ಯಕ್ಷರಾಗಿದ್ದ ಸಣ್ಣಕೆರೆ ಶ್ರೀನಿವಾಸ್ ಇವರ ನಿಧನಕ್ಕೆ ಸಂತಾಪ ಸೂಚಿಸಿದ ಆಡಳಿತ ಮಂಡಳಿ ಸಭೆ, ಸಂಘದ ನೂತನ ಅಧ್ಯಕ್ಷರಾಗಿ ಎಸ್.ಪಿ. ಚಂದ್ರಶೇಖರ್, ಶಿಗದಾಳು ಇವರನ್ನು ಸರ್ವಾನುಮತದಿಂದ ಆಯ್ಕೆ ಮಾಡಿತು.

## "ರಚನಾತ್ಮಕ ಕಾರ್ಯಕ್ಕೆ ಸಹಕಾರ, ಕಿರುಕುಳಕ್ಕೆ ಪ್ರತಿಭಟನೆ"

ಕೊಪ್ಪ : ಚುನಾವಣೆಯಲ್ಲಿ ಆಯ್ಕೆಯಾದ ಜನ ಪ್ರತಿನಿಧಿ ಯಾವುದೇ ಪಕ್ಷಕ್ಕೆ ಮಾತ್ರ ಪ್ರತಿನಿಧಿಯಲ್ಲ ರಚನಾತ್ಮಕವಾದ ಯಾವುದೇ ಕಾರ್ಯಕ್ರಮಕ್ಕೆ ನಮ್ಮೆಲ್ಲರ ಸದಾ ಬೆಂಬಲವಿದೆ. ಆದರೆ ಚುನಾವಣೆಯಲ್ಲಿ ಜನತಾ ದಳದ ಪರ ಕೆಲಸ ಮಾಡಿದ ಕಾರ್ಯಕರ್ತರಿಗೆ ಕಾಂಗ್ರೆಸ್ ನವರಿಂದ ಕಿರುಕುಳ, ತೊಂದರೆ ಉಂಟಾದಲ್ಲಿ ಅವರಾಗಲಿ ನಾನಾಗಲಿ ನಿರ್ವೀರ್ಯರಾಗಿ ಕುಳಿತುಕೊಳ್ಳುವುದಿಲ್ಲ. ಹಾಗೆ ವರ್ತಿಸದಂತೆ ಕಾಂಗ್ರೆಸ್ ಕಾರ್ಯಕರ್ತರಿಗೆ ಸೂಚನೆ ನೀಡಿ– ಎಂದು ಮಾಜಿ ಮಂತ್ರಿ ಎಚ್. ಜಿ. ಗೋವಿಂದ ಗೌಡ ನೂತನ ಶಾಸಕ ಶಾಮಣ್ಣನವರಿಗೆ ಇಲ್ಲಿ ಕರೆ ನೀಡಿದರು.

ಡಿ. 6ರಂದು ಇಲ್ಲಿ ನಡೆದ ತಾ|| ಜನತಾ ದಳದ ಕಾರ್ಯಕರ್ತರ ಸಭೆಯಲ್ಲಿ ಮಾತನಾಡುತ್ತಿದ್ದ ಅವರು ಯುವಕರಿಗೆ ಅವಕಾಶ ನೀಡಲು ಎಷ್ಟೇ ಯತ್ನಿಸಿದರೂ ಕೊನೆಗೆ ತಾನೇ ಪುನಃ ಸ್ಪರ್ಧಿಸಬೇಕಾಗಿ ಬಂದುದನ್ನು ವಿವರಿಸಿ, ಬಡತನ, ಅವಿದ್ಯಾವಂತರು ಇರುವವರೆಗೆ ನಿಷ್ಠಾವಂತ ಪ್ರಾಮಾಣಿಕ ರಾಜಕಾರಣಿಗಳಿಗೆ ಅವಕಾಶ ಕಡಿಮೆ; ವಿರೋಧಿ ಮತಗಳ ಹಂಚಿಕೆಯಿಂದ ಸೋಲನ್ನನುಭವಿಸಬೇಕಾಯಿತು. ಎಂದು ವಿಶ್ಲೇಷಿಸಿದರು.

400 ಕ್ಕೂ ಹೆಚ್ಚು ಕಾರ್ಯಕರ್ತರು ಭಾಗವಹಿಸಿದ್ದು, ಸೋಲಿನ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ನೀಡಿದರು. ಆನಂದ ರಾಮ ಭಟ್ ಅಧ್ಯಕ್ಷತೆ ವಹಿಸಿದ್ದರು. ಸಭೆ ಪ್ರಾರಂಭದಲ್ಲಿ ಉತ್ಸಾಹಿ ಕಾರ್ಯಕರ್ತ ಸಣ್ಣಕೆರೆ ಶ್ರೀನಿವಾಸ್ ನಿಧನಕ್ಕೆ ಸಂತಾಪ ಸೂಚಿಸಿ ಮೌನ ಆಚರಿಸಿತು. ಕೆ. ವಿ. ಮಂಜುನಾಥ ಶೆಟ್ಟಿ ಸ್ವಾಗತಿಸಿ, ಡಿ. ನಾಗರಾಜ್ ವಂದಿಸಿದರು


'ಮುಂಜಾವು' ಚಂದಾ ಹಣ ಕಳಿಸಿ

ಸಹಕರಿಸಿ

ವಾರ್ಷಿಕ ಚಂದಾ : ರೂ. 35-00

# ಚುನಾವಣೆಯ ಪಾಠಗಳು — ಗೆದ್ದವರಿಗೂ ಸೋತವರಿಗೂ.

**ಲೋಕಸಭೆ ಮತ್ತು ಕರ್ನಾಟಕ ಮತ್ತಿತರ ಕೆಲ ವಿಧಾನ ಸಭೆಗಳ ಚುನಾವಣೆಗಳು ಮುಗಿದಿವೆ. ಉತ್ತರದ ಬಹುತೇಕ ರಾಜ್ಯಗಳ ವಿಧಾನಸಭೆಗಳಿಗೆ ಇಷ್ಟರಲ್ಲೇ (ಮಾರ್ಚ್, 90) ಚುನಾವಣೆಗಳಾಗಬೇಕಿವೆ. ಈ ಮಧ್ಯೆ, ನಡೆದು ಹೋದ ಚುನಾವಣೆಯ ಫಲಿತಾಂಶಗಳ ಕಡೆಗೊಮ್ಮೆ ಕಣ್ಣು ಹಾಯಿಸಿದರೆ....**

ದೇಶದ ಲೋಕಸಭೆಗೆ ಮತ್ತು ಕೆಲವು ರಾಜ್ಯಗಳ ವಿಧಾನ ಸಭೆಗಳಿಗೆ ಈ ಬಾರಿ ನಡೆದ ಚುನಾವಣೆಗಳು ಅಭೂತಪೂರ್ವ ಎನ್ನಿಸಿವೆ. ಸ್ವತಂತ್ರ ಭಾರತದ ಚರಿತ್ರೆಯಲ್ಲಿ ಮೊಟ್ಟ ಮೊದಲ ಬಾರಿಗೆ ಕೇಂದ್ರದಲ್ಲಿ 'ಸಂಮಿಶ್ರ ಸರಕಾರ' ರೂಪುಗೊಂಡಿದ್ದರೆ, ಅಲ್ಲಿ ಕಾಂಗ್ರೆಸ್ಸನ್ನು ಸೋಲಿಸಿ ಸರ್ಕಾರ ರಚಿಸಿರುವ ರಾಷ್ಟ್ರೀಯ ರಂಗದ ಅಂಗ ಪಕ್ಷಗಳೇ ಆದ ಜನತಾ ದಳ ಮತ್ತು ತೆಲುಗು ದೇಶಂ ಸರ್ಕಾರಗಳಿದ್ದ ಕರ್ನಾಟಕ ಮತ್ತು ಆಂಧ್ರದಲ್ಲಿ ಕಾಂಗ್ರೆಸ್ ಮರಳಿ ಅಧಿಕಾರಕ್ಕೆ ಬಂದಿದೆ.

ಚುನಾವಣೆಯ ಫಲಿತಾಂಶಗಳ ಬಗ್ಗೆ ದೇಶಾದ್ಯಂತ ವಿಧವಿಧದ ಚರ್ಚೆಗಳಾಗುತ್ತಿವೆ. ಆದರೆ ಎಲ್ಲರೂ ಒಪ್ಪುವ ಒಂದು ಅಂಶವೆಂದರೆ, ಯಾವುದೇ ಪಕ್ಷ ಎಷ್ಟೇ ಜನಪ್ರಿಯತೆಯ ಅಲೆಯಲ್ಲಿ ತೇಲಿದ್ದರೂ ಸಹ, ಮತದಾರರನ್ನು ಲಘುವಾಗಿ ಪರಿಗಣಿಸುವಂತಿಲ್ಲ ಎಂಬುದು.

### ಭ್ರಷ್ಟತೆ, ಅದಕ್ಷತೆ

ಕೇಂದ್ರದಲ್ಲಿ 1985ರಲ್ಲಿ "ಕ್ರಿಯಾಶೀಲ ಸರ್ಕಾರ" ಕೊಡುವುದಾಗಿ ಅಧಿಕಾರಕ್ಕೆ ಬಂದ ರಾಜೀವ್‌ಗಾಂಧಿ ಯಾವ ರಂಗದಲ್ಲೂ ಸಹ, ದೇಶದ ಜನ ನೆನಪಿಡುವಂಥ ಅಥವಾ ಜನರ ಜೀವನಮಟ್ಟ ಸುಧಾರಿಸುವಂಥ ಏನನ್ನೂ ಸಾಧಿಸಲಿಲ್ಲ. ಬದಲಿಗೆ ಹೆಜ್ಜೆ ಇಟ್ಟಲ್ಲೆಲ್ಲ ಸಮಸ್ಯೆಗಳೇ ಉದ್ಭವಿಸಿದವು ಅಥವಾ ಉಲ್ಬಣಿಸಿದವು. ಪಂಜಾಬ್, ಕಾಶ್ಮೀರ, ಶ್ರೀಲಂಕಾ, ನೇಪಾಳ ಇತ್ಯಾದಿ ಇತ್ಯಾದಿ. ಬೆಲೆ ಏರಿಕೆಯಂತೂ ಕಳೆದೊಂದೆರಡು ವರ್ಷದಲ್ಲಿ ಜನತೆ ತತ್ತರಿಸುವಂತೆ ಹೆಚ್ಚಿತು.

ಇದಕ್ಕೆಲ್ಲ ಕಳಶವಿಟ್ಟಂತೆ, ದೇಶದ ರಕ್ಷಣೆಯ ಘನ ಕಾರ್ಯಕ್ಕೇ ಕನ್ನವಿಕ್ಕಿದಂಥ ಬೋಫೋರ್ಸ್ ಲಂಚ ಪ್ರಕರಣ ರಾಜೀವ್ ಗಾಂಧಿಯನ್ನು ಕೇವಲ ಒಬ್ಬ ತೀರಾ ಸಾಧಾರಣ ಭ್ರಷ್ಟಾಚಾರಿಯನ್ನಾಗಿ ತೆರೆದು ತೋರಿಸಿತು. ಜೊತೆಗೇ ಕಾಂಗ್ರೆಸ್ ನಾಯಕಮಣಿಗಳ ಹಗರಣಗಳೂ ದಿನ ನಿತ್ಯದ ಸುದ್ದಿಯಾದವು.

ಈ ಭ್ರಷ್ಟತೆ, ನಿಷ್ಕ್ರಿಯತೆ, ದುರಾಡಳಿತಗಳನ್ನು ವಿರೋಧಿಸಿ ಹೊರ ಬಂದ ವಿ. ಪಿ. ಸಿಂಗ್ ಪ್ರಬಲ ಜನಪರ ಚಳುವಳಿಯಾಗಿ 'ಜನಮೋರ್ಚಾ'ವನ್ನು ಸಂಘಟಿಸಿದ್ದೇ ಅಲ್ಲದೆ, ಹರಿದು ಹಂಚಿ ಹೋಗಿದ್ದ ವಿರೋಧ ಪಕ್ಷಗಳನ್ನು 2 ವರ್ಷಗಳ ತಾಳ್ಮೆಯ ಪ್ರಯತ್ನಗಳಿಂದ ಒಂದುಗೂಡಿಸಿ, ರಾಷ್ಟ್ರೀಯ ರಂಗ ರೂಪಿಸಿದಾಗ, ಜನತೆಯಲ್ಲಿ ಸಹಜವಾಗಿಯೇ ಆಶಾಕಿರಣವನ್ನು ಮೂಡಿಸಿದರು. ಇದರೆದುರು ಇಡೀ ಉತ್ತರ ಭಾರತದಲ್ಲಿ ಕಾಂಗ್ರೆ ನೆಲ ಕಚ್ಚುವುದು ಕಷ್ಟವಾಗಲಿಲ್ಲ.

### ಭ್ರಮ ನಿರಸನ

ಆದರೆ ಇತ್ತ ದಕ್ಷಿಣದ ಆಂಧ್ರ ಮತ್ತು ಕರ್ನಾಟಕದಲ್ಲಿ ತೆಲುಗು ದೇಶಂ ಮತ್ತು ಜನತಾ (ದಳ) ಸರ್ಕಾರಗಳು ಜನತೆಗೆ ಭಯಂಕರ ಭ್ರಮ ನಿರಸನ ಉಂಟು ಮಾಡಿದ್ದವು. ಲೆಕ್ಕವಿಲ್ಲದಷ್ಟು ವಂಚನೆ, ಭ್ರಷ್ಟತೆಗಳ ಪ್ರಕರಣಗಳಲ್ಲಿ ಭಾಗಿಯಾದ ಹೆಗಡೆ, ತನ್ನ 'ರಾಷ್ಟ್ರೀಯ ಮಹತ್ವಾಕಾಂಕ್ಷೆ'ಗಾಗಿ ಕೋಟಿಗಟ್ಟಲೆ ಹಣ ಮಾಡುತ್ತ ರಾಜ್ಯವನ್ನು ಹಿಂದೆಂದೂ ಇಲ್ಲದ ರೀತಿ (ತಿಕ್ಕಲ ಗುಂಡೂರಾವ್‌ನ ಆಡಳಿತದಲ್ಲೂ ಆಗದಿದ್ದಂತೆ) ಧಿವಾಳಿ ಎಬ್ಬಿಸಿದರು. ಸಾಲದ್ದಕ್ಕೆ, 'ರಾಜ್ಯ ಮಟ್ಟದ ಮಹತ್ವಾಕಾಂಕ್ಷಿ' ದೇವೇಗೌಡರನ್ನು ತುಳಿಯುವ ಯತ್ನದಲ್ಲಿ ಪಕ್ಷ ಹೋಳಾಗುವುದನ್ನೂ ಲೆಕ್ಕಿಸಲಿಲ್ಲ. ಜನತೆ ಇವರಿಬ್ಬರನ್ನೂ ತಿರಸ್ಕರಿಸಲು ಇನ್ನೇನು ಬೇಕು?

ಜನತೆಯ ದೃಷ್ಟಿಯಲ್ಲಿ, ಜನತಾ ಪಕ್ಷ ಹೋಳಾಗುವುದಕ್ಕೆ ಮೂಲ ಕಾರಣವಾಗಿ ಕಂಡ ದೇವೇಗೌಡರಂತೂ ತಾವು ಎಂದೂ ಸೋಲದಿದ್ದ ಹೊಳೆನರಸೀಪುರದಲ್ಲೇ ಮಣ್ಣಾದರು; ಕನಕಪುರದಲ್ಲೂ ಸ್ಪರ್ಧಿಸಿ, ಅಲ್ಲೂ ಸೋತು ಹೋದರು.

### ಐಲು ದೊರೆ

ಆಂಧ್ರದಲ್ಲಿ ಎನ್. ಟಿ. ರಾಮರಾವ್ ಜನತೆಯ ಕೇವಲ ಭ್ರಾಂತಿಯನ್ನೇ ಬಂಡವಾಳ ಮಾಡಿಕೊಂಡಿದ್ದವರು. ಇದರ ಜೊತೆಗೆ ಜನ ತನ್ನನ್ನು ದೇವರೆಂದೇ ನಂಬಿದ್ದಾರೆಂಬ ತಮ್ಮ ಸ್ವಂತದ ಭ್ರಾಂತಿಯನ್ನೂ ಸೇರಿಸಿ, ದೊಡ್ಡ 'ಐಲು ದೊರೆ'ಯಾದರು. ಸ್ವಜನ ಪಕ್ಷಪಾತದಲ್ಲಿ ಮುಳುಗಿ, ಅದನ್ನು ನಿರ್ಲಜ್ಜವಾಗಿ ಸಮರ್ಥಿಸಿಕೊಳ್ಳುತ್ತ ಹೋದರು. ಜನತೆಯ ಬವಣೆ ಅಂಕೆ ತಪ್ಪುತ್ತ ಹೋದಂತೆ, ಹಳೆಯ ಸಮಸ್ಯೆಗಳಾವುವೂ ಬಗೆಹರಿಯದೆ ಉಲ್ಬಣಗೊಂಡುದಲ್ಲದೆ, ಹೊಸ ಹೊಸ ಸಮಸ್ಯೆಗಳನ್ನೂ ಸೃಷ್ಟಿಸಿದರು; ಅವಕ್ಕೆಲ್ಲ ಬೆಳ್ಳಿ ತೆರೆಯಲ್ಲಿ ಪರಿಹಾರ ಕಾಣಿಸಲು ಹೋಗಿ, ಜನರಿಂದ ಛೀಮಾರಿಸಿ ಕೊಂಡರು

### ನಿಷ್ಕರ್ಷೆಯ ಸಾಮರ್ಥ್ಯ

ಭಾರತದ ಮತದಾರರು ಕೇವಲ ದಡ್ಡರು; ಭ್ರಷ್ಟಾಚಾರ, ಒಳಜಗಳ, ಸ್ವಜನ ಪಕ್ಷಪಾತ ಮತ್ತು ದುರಾಡಳಿತಗಳ ಬಗ್ಗೆ ತಲೆ ಕೆಡಿಸಿಕೊಳ್ಳುವುದಿಲ್ಲ ಒಂದಿಷ್ಟು ಪುಕ್ಕಟೆ ತಾಳಿ-ಪಂಚೆ, ಭತ್ಯೆಗಳು, ರೋಜ್‌ಗಾರ್‌ಗಳನ್ನು ಕೊಟ್ಟುಬಿಟ್ಟರೆ ಆಯಿತು—ಓಟು ಹಾಕುತ್ತಲೇ ಇರುತ್ತಾರೆ ಎಂಬ 'ಸಿದ್ಧಾಂತ'ಗಳು ಈ ಬಾರಿ ಈ ನಾಯಕಮಣಿಗಳ ಜೊತೆಗೇ ಮಣ್ಣು ಮುಕ್ಕಿವೆ. ರಾಜೀವ್ ಗಾಂಧಿ, ಎನ್‌ಟಿಆರ್ ಮತ್ತು ಹೆಗಡೆ–ದೇವೇಗೌಡಗಳ ಪತನ ಮತದಾರರ ನಿಷ್ಕರ್ಷಾ ಸಾಮರ್ಥ್ಯಕ್ಕೆ ಮೂರು ಅತ್ಯುತ್ತಮ ಉದಾಹರಣೆಗಳಾಗಿವೆ.

(ಅಂದ ಮಾತ್ರಕ್ಕೆ ನೂರಕ್ಕೆ ನೂರು ಮತದಾರರೂ ಇಷ್ಟು ಪ್ರಜ್ಞಾವಂತರಾಗಿ ಬಿಟ್ಟಿದ್ದಾರೆಂದೇನೂ ಅಲ್ಲ. ಏನನ್ನೂ ಯೋಚಿಸದೆ, ತಾವು ನಂಬಿದ್ದ ಯಾವುದೋ ಒಂದು ಪಕ್ಷಕ್ಕೇ–ಹೆಚ್ಚಾಗಿ ಕಾಂಗ್ರೆಸ್ಸಿಗೇ–ಶಾಶ್ವತವಾಗಿ ಓಟು ಹಾಕುತ್ತಾ ಹೋಗುತ್ತಿರುವ ಒಂದು ಸಾಕಷ್ಟು ದಪ್ಪದ 'ಹೆಂಟ್' (ಅಥವಾ ಇಡುಗಂಟು) ಇನ್ನೂ ಇದೆ. ಆದರೆ, ಫಲಿತಾಂಶಗಳನ್ನು ತಮಗೆ ಬೇಕಾದ ಕಡೆಗೆ ವಾಲಿಸಲು ಬೇಕಾಗುವಷ್ಟು ಸಂಖ್ಯೆಯ ಮತದಾರರಲ್ಲಿ ಈ ರೀತಿಯ ವಿಮರ್ಶಾ ಸಾಮರ್ಥ್ಯ ಬೆಳೆದಿದೆ ಎಂಬುದು ಸತ್ಯ. ಈ ಬಾರಿಯಂತೂ ಇದು ನಿಚ್ಚಳವಾಗಿ ಸಾಬೀತಾಗಿದೆ.) (3ನೇ ಪುಟಕ್ಕೆ)

ಪದ್ಯ ದಂಕಣ

### ನಿರೀಕ್ಷೆ

ಹೊತ್ತು ನೆತ್ತಿಗೇರುವ ಹೊತ್ತು  
ಹೊಸಿಲಲ್ಲಿ ಕೂತ ಹುಡುಗ  
ಕಾಯುತ್ತಾನೆ  
ಹೊತ್ತಾರೆ ಬರಬೇಕಿದ್ದ  
ಹೊಸ ಅತಿಥಿಯಾಗಮನಕ್ಕೆ,  
ಹೂವ ಹಿಡಿದು  
ಬಾಗಿಲನು ತೆರೆದು....  
ಎಂದೋ ಬರಬೇಕಿತ್ತು  
ಇನ್ನೂ ಬಂದಿಲ್ಲ,  
ಎಂದು ಬಂದಾಳು ?  
ಕಣ್ಣಲ್ಲಿ ನಿರೀಕ್ಷೆ,  
ಕಾಲದ ಪರೀಕ್ಷೆ ....  
ಕೇಕೆ ಹಾಕುವ ಕನಸುಗಳ  
ಗದ್ದಲದ ನಡುವೆ  
ಆಳದಿಂದೆದ್ದ ನೋವಿನ ಕೂಗ  
ಎದೆಯೊಳಕ್ಕೇ ಒದ್ದು  
ಕದ್ದು ಆಲಿಸುತ್ತಾನೆ  
ಹೆಜ್ಜೆಗಳ ಸದ್ದು  
ಇಲ್ಲ, ಬಂದಿಲ್ಲ.  
ಕುಣಿದು ದಣಿದ ಕನಸುಗಳಿಗೆ  
ಕಣ್ಣೀರ ತಿನಿಸು ಉಣಿಸುತ್ತ  
ಹಾರೈಸುತ್ತಾನೆ ಹುಡುಗ–  
'ಇಂದು ಬಂದಾಳು.....!' ಎಂದು.

—ಬಿ. ವಿ. ಕುಮಾರ್

ಅಲೆವ ಮನ  
● 'ರಾಮು'

## ದೊಡ್ಡತನ, ಸಣ್ಣತನ

ಆತ್ಮೀಯ,

ಎರಡು ವಾರದಿಂದ ಗಮನಿಸುತ್ತಾ ಇದ್ದೆ: ಪ್ರತಿ ಭಾನುವಾರ 20–30 ಜನರ ಒಂದು ಗುಂಪು ನಮ್ಮೂರ ಜಾತ್ರೆ ಬಯಲಿನಲ್ಲೋ, ರಸ್ತೆಯ ಮೇಲೋ ಕೂತು ಒಂದು ಗಂಟೆ ಏನೋ 'ಭಾರೀ' ಮಾತಾಡಿಕೊಳ್ಳುತ್ತಿದ್ದರು

ಮೂರನೇ ವಾರ ಮಂಜೇಶ್ ಎನ್ನುವ ಕಲ್ಲು ಕೆಲಸದವರು ಬಂದು, ತಾವು 26 ಜನರು ಸೇರಿ ಒಂದು 'ಶ್ರಮ ಜೀವಿಗಳ ಸಂಘಟನೆ' ಮಾಡಿಕೊಂಡಿರುವುದಾಗಿ ಹೇಳಿದರು. ಅದರಲ್ಲಿ ಕಲ್ಲು ಕೆಲಸ, ಗಾರೆ ಕೆಲಸ, ಮರಗೆಲಸ, ಕುಲುಮೆ ಕೆಲಸ ಮುಂತಾಗಿ ಒಟ್ಟಾರೆ ಶ್ರಮಿಕರೇ ಇರುವುದಂತೆ

ಅವರ ಕಾರ್ಯಯೋಜನೆ ಕೇಳಿ ನನಗೆ ನಂಬಲಿಕ್ಕೇ ಆಗಲಿಲ್ಲ. "ನಾವು ಪ್ರತಿ ಭಾನುವಾರ ಶ್ರಮದಾನ ಮಾಡ್ಬೇಕೂಂತಿದೀವಿ ಸಾರ್. ನಮ್ಮೂರ ಆಸ್ಪತ್ರೆಗೆ ಹೊಂದಿಕೊಂಡು ಒಂದು ಹೆರಿಗೆ ಕೋಣೆ ಕಟ್ತೇವಿ"!

ಬೆವರೇ ಬಂಡವಾಳವಾಗುಳ್ಳ ಈ ನನ್ನ ಜನ, ಜಾತಿ–ಮತ ಭೇದವಿಲ್ಲದೆ ಒಟ್ಟಾದ ಈ ಜನ ಹೇಳುವ ಮಾತು ಕೇಳಿದರೆ ನನ್ನ ಹೃದಯ ತುಂಬಿ ಬರುತ್ತದೆ. ನಿನಗೆ?

ಹೇಳಿದ್ದಷ್ಟೇ ಅಲ್ಲ, ಒಂದು ವಾರ ಅವರ ಊರಿನ ಆಸ್ಪತ್ರೆಯ ಬೇಲಿ ದುರಸ್ತಿ ಮಾಡಿದರು ಮತ್ತೊಂದು ವಾರ ಆ ಊರ ಸರ್ಕಾರಿ ಶಾಲೆಯ ಶಾಲಾ ವನಕ್ಕೆ ಬೇಲಿ ನಿರ್ಮಿಸಿ ಕೊಟ್ಟರು. (ಊರಿನ ಇತರ ಯುವಕರ ಸಹಯೋಗದೊಂದಿಗೆ). ಅವರದೇ ಒಂದು 'ಆಫೀಸು', ವಾಚನಾಲಯ, ಕೇರಂ, ದುಡಿತದ ದುಡ್ಡು ಕುಡಿತಕ್ಕೇ ಚೆಲ್ಲದೆ, ಹನಿ ಹನಿ ಸಂಗ್ರಹಿಸಿ ಸಣ್ಣ ಪುಟ್ಟ ಪ್ರವಾಸ....ಇವು ಅವರ ಕೆಲವು ಭಾವೀ ಯೋಜನೆಗಳು.

ಹಣಕ್ಕಾಗಿ ಅವರು ಯಾರ ಬಳಿಯೂ ಕೈ ಚಾಚುತ್ತಿಲ್ಲ: ತಮ್ಮ ದುಡಿಮೆಯಲ್ಲಿ ಸ್ವಲ್ಪ ಪಾಲನ್ನು ಬ್ಯಾಂಕಿನಲ್ಲಿಡುತ್ತಿದ್ದಾರೆ.

ಇವರಿಗೆ 'ಶುಭವಾಗಲಿ' ಎನ್ನಲೆ? ಇಂಥ ನಿಷ್ಕಳಂಕ ಸಾಮಾಜಿಕ ಕಾಳಜಿ ಇರುವವರ ಒಂದೊಂದು ಬೆವರ ಹನಿ ಬಿದ್ದಲ್ಲಿ ನನ್ನ ಸಾವಿರ ಸಾವಿರ ನಮಸ್ಕಾರಗಳು!

* * *

ಜರ್ಮನಿಯಿಂದ ಅಧ್ಯಯನಕ್ಕಾಗಿ ನಮ್ಮ ಕುಗ್ರಾಮಕ್ಕೆ ಬಂದಿದ್ದ ಡಾ॥ ನಾಬರ್ಟ್ ಬಗ್ಗೆ ಹಿಂದೊಮ್ಮೆ ಬರೆದಿದ್ದೆ, ನೆನಪಿದೆಯಾ? ನಮ್ಮೂರ ಅಂಗನವಾಡಿ ಮಕ್ಕಳಿಗಾಗಿ ಆತ ತನ್ನೂರಿನಿಂದ ಆಟಿಕೆಗಳ ಪಾರ್ಸೆಲ್ ಒಂದನ್ನು ಕಳಿಸಿದ. ಆದರೆ ಅದು ನನ್ನ ಕೈ ಸೇರಿದ್ದು ಪೋಸ್ಟ್ ಮಾಸ್ಟರ್ ಜನರಲ್‌ಗೆ ದೂರು ಕೊಟ್ಟ ಮೇಲೇ !

ಅದೂ ಹೇಗೆ? ಪಾರ್ಸೆಲ್‌ಗೆ ಅಂಟಿಸಿದ್ದ ಅಢೆಸಿವ್ ಪ್ಲಾಸ್ಟರ್ ಹರಿದು ಪ್ಲಾಸ್ಟಿಕ್ ದಾರ ಕಟ್ಟಿತ್ತು !- ಮಕ್ಕಳ ಉಪಯೋಗಕ್ಕೆಂದು ನಾಬರ್ಟ್ ಪ್ರೀತಿಯಿಂದ ಅಷ್ಟು ಪೆನ್ನುಗಳನ್ನೂ ಕಳಿಸಿದ್ದನಂತೆ. ಅವೆಲ್ಲ ನಾಪತ್ತೆ ! ಸಂಕದವರ ಕಾರುಬಾರು. ಹೇಗಿದೆ— ಪುಟ್ಟ ಮಕ್ಕಳಿಗಾಗಿ ಕಳಿಸಿದ ಪ್ರೀತಿಯ ಕಾಣಿಕೆಗಳನ್ನೂ ಬಿಡದ ದೊಡ್ಡವರ ಸಣ್ಣ ತನ, ಭಂಡತನ !?

ನಮ್ಮೀ ದೇಶ ಉದ್ಧಾರವಾಗುತ್ತದೆಯೆ!?

ನಿನ್ನವ,

'ರಾಮು,

ಓದುಗರ ಪತ್ರ

# ಕೊಪ್ಪದ ಸಾಹಸಪ್ರಿಯರ ಕಣ್ಮಣಿಯಾಗಿದ್ದ 'ಮಯೂರ'ನ ಅಕಾಲ ಮರಣಕ್ಕೆ ಸಂತಾಪ

ಕೊಪ್ಪ ಮತ್ತು ಸುತ್ತಮುತ್ತಲವರಿಗೆ ಈಚಿನ 2-3 ವರ್ಷಗಳಲ್ಲಿ ಚಿರಪರಿಚಿತ ನಾಗಿದ್ದ ಕುದುರೆ 'ಮಯೂರ' ಡಿ. 5ರಂದು ಹಠಾತ್ತಾಗಿ ಮರಣ ಹೊಂದಿತು.

ಕೊಪ್ಪದಲ್ಲಿ ರಾಜ್ಯೋತ್ಸವ ಮತ್ತಿತರ ಸಾರ್ವಜನಿಕ ಮೆರವಣಿಗೆಯ ವೇಳೆ ತಪ್ಪದೆ ಭಾಗವಹಿಸುತ್ತಿದ್ದ ಮಯೂರ ಹಲವಾರು ಪ್ರತಿಷ್ಠಿತ ಪ್ರಶಸ್ತಿಗಳನ್ನು ಗೆದ್ದಿದ್ದ ಅಪ್ಪಟ ರೇಸ್ ಕುದುರೆ. ಕೊಪ್ಪದ ಬಳಿಯ ಹಡ್ಲು ಕುಡಿಗೆ ಭುಜಂಗ ರಾವ್ ಅವರ ಆಸಕ್ತಿ ಮತ್ತು ಸಾಹಸ ಪ್ರಿಯತೆಗೆ ಮೆಚ್ಚಿ ಪಿ ಜಿ. ಗುರ್ಜರ್ ಅವರು ಬೆಂಗಳೂರು ರೇಸ್ ಕ್ಲಬ್ಬಿನಿಂದ ಈ ಕುದುರೆಯನ್ನು ಕೊಡಿಸಿದ್ದರು.

ಈ ವರ್ಷ ಭುಜಂಗರಾವ್ ಮತ್ತು ಅವರ ಬಳಗದವರು ಕುದುರೆ ಸವಾರಿ ಕ್ರೀಡೆಯ (ಅಥವಾ ಕಲೆಯ?) ಕ್ರಮಬದ್ಧ ತರಬೇತಿಯನ್ನೇ ಸಾರ್ವಜನಿಕರಿಗಾಗಿ ಆರಂಭಿಸಿ, ಎಷ್ಟೋ ಜನ ಸಾಹಸ ವೀರ-ವೀರೆಯರಿಗೆ ಸವಾರಿ ಕಲಿಸಿದ್ದರು.

ಇಂಥ ಉತ್ತಮ ಕುದುರೆಯೊಂದನ್ನು ಸಾಕುವ ಕಷ್ಟಕರವಾದ ಹವ್ಯಾಸಕ್ಕೆ ಮಲೆನಾಡಿನಲ್ಲಿ ಯಾರೂ ಧೈರ್ಯ ಮಾಡಿರಲಿಲ್ಲ. ಅಂಥ ಸಾಹಸಕ್ಕೆ ಕೈ ಹಚ್ಚಿ ಸಾರ್ವಜನಿಕರಿಂದ ಭಲೆ! ಎನ್ನಿಸಿಕೊಂಡಿದ್ದ ಭುಜಂಗರಾವ್, ತಮ್ಮ ಆತ್ಮೀಯ ಮಯೂರನ ಅಕಾಲ ಮರಣದಿಂದ ಧೃತಿಗೆಡದೆ, ಈ ಸಾಹಸ ಪ್ರವೃತ್ತಿಯನ್ನು ಇಲ್ಲಿನ ಜನತೆಯಲ್ಲಿ ಜೀವಂತವಾಗಿಡಲು ಪುನಃ ಪ್ರಯತ್ನಿಸಲಿ ಎಂದು ಹಾರೈಸುತ್ತ, ಅವರ 'ಗೆಳೆಯ'ನ ಅಗಲಿಕೆಯ ದುಃಖದಲ್ಲಿ ನಾವೂ ಭಾಗಿಯಾಗುತ್ತೇವೆ.

—ಅಭಿಮಾನಿಗಳು, ಕೊಪ್ಪ

ಇನ್ನೂ ಪುಟಕ್ಕಿಡದ ಎಲೆಮರೆಯ ಕಲಾವಿದ

# ಬೊಂಬೆಯಾಟದ ಶಂಕರನಾರಾಯಣ

ಶೃಂಗೇರಿಯ ಜೆ ಸಿ.ಬಿ ಎಂ. ಕಾಲೇಜು ವಿಜ್ಞಾನ ಸಂಘದ ಆಶ್ರಯದಲ್ಲಿ ಈಚೆಗೆ ಯಕ್ಷಗಾನ ಬೊಂಬೆಯಾಟ ಮತ್ತು ಚೈತನ್ಯ ಯುವಕ ಸಂಘದವರಿಂದ 'ಓಟು ವವರು' ಎಂಬ ನಾಟಕ ಪ್ರದರ್ಶನ ನಡೆಯಿತು.

ಬೊಂಬೆಯಾಟ ಪ್ರದರ್ಶಿಸಿದ ಶಂಕರನಾರಾಯಣ ಇದೇ ಕಾಲೇಜಿನ ಮೂರನೇ ಬಿ ಎಸ್ಸಿ ವಿದ್ಯಾರ್ಥಿ ಎಂಬುದು ಇಲ್ಲಿ ವಿಶೇಷ. ತಮ್ಮ ಮಿತ್ರ ವಸಂತ ಅವರೊಂದಿಗೆ 'ಭೀಷ್ಮ ಪ್ರತಿಜ್ಞೆ' ಮತ್ತು 'ಕೀಚಕ ವಧೆ' ಎಂಬ ಯಕ್ಷಗಾನ ಪ್ರಸಂಗಗಳನ್ನು, ಕ್ಯಾಸೆಟ್‌ಗಳ ಹಿಮ್ಮೇಳದಲ್ಲಿ ಇವರು ಸುಮಾರು 1 ಗಂಟೆ ಕಾಲ ಯಶಸ್ವಿಯಾಗಿ ಪ್ರದರ್ಶಿಸಿದರು.

ಶಂಕರನಾರಾಯಣ ಕೊಪ್ಪದ ಬಳಿಯ ಸೂರ್ಯದೇವಸ್ಥಾನದ ಒಂದು ಬಡಗಿಗಳ ಕುಟುಂಬಕ್ಕೆ ಸೇರಿದವರು. ಚಿಕ್ಕಂದಿನಲ್ಲಿ ಒಮ್ಮೆ ಮಾತ್ರ ಬೊಂಬೆಯಾಟ ನೋಡಿದ್ದ ಇವರು, ತಮ್ಮ ಸ್ವಂತ ಕಲ್ಪನೆ ಮತ್ತು ಪ್ರತಿಭೆಯಿಂದಲೇ ಯಕ್ಷಗಾನದ ಬೊಂಬೆಗಳನ್ನು ತಾವೇ ತಯಾರಿಸಿದ್ದಾರೆ. ಬೊಂಬೆ ತಯಾರಿಕೆ, ಬೊಂಬೆಯಾಟ ಅಥವಾ ಯಕ್ಷಗಾನದಲ್ಲಿ ಕ್ರಮಬದ್ಧ ತರಬೇತಿಯನ್ನೇನೂ ಇವರು ಪಡೆದಿಲ್ಲ. ಸದ್ಯ ಮೇಲ್ಕಂಡ 2 ಪ್ರಸಂಗಗಳಿಗಾಗುವಷ್ಟು ಬೊಂಬೆಗಳನ್ನು ಮಾತ್ರ ತಯಾರಿಸಿದ್ದಾರಂತೆ.

ಇವರು ಈ ಕಲೆಯನ್ನು ಶಾಸ್ತ್ರೀಯವಾಗಿ ಅಭ್ಯಾಸ ಮಾಡಿ ತಮ್ಮ ಪ್ರತಿಭೆಯನ್ನು ಸರಿಯಾಗಿ ಬೆಳೆಸಿಕೊಂಡರೆ ಖಂಡಿತ ಒಬ್ಬ ಉತ್ತಮ ಕಲಾವಿದರಾಗಬಲ್ಲರು. ಇದಕ್ಕೆ ಸಾರ್ವಜನಿಕರ, ಕಲಾಭಿಮಾನಿಗಳ ಪ್ರೋತ್ಸಾಹವೂ ಅಗತ್ಯ.

ಇವರ ಇತರ ಹವ್ಯಾಸಗಳು ಕವನ ರಚನೆ ಮತ್ತು ಮಾಡೆಲ್‌ಗಳನ್ನು ತಯಾರಿಸುವುದು. ಒಮ್ಮೆ ನೋಡಿದ ಯಾವುದೇ ಒಂದು ವಸ್ತುವನ್ನೋ ಯಂತ್ರವನ್ನೋ ಇವರು ಯಥಾವತ್ತಾಗಿ ಮರದಲ್ಲಿ ಕೆತ್ತಿ ಅದರ ಮಾದರಿ ತಯಾರಿಸಿಬಿಡುತ್ತಾರೆಂದು ಇವರ ಸ್ನೇಹಿತರು ಹೇಳುತ್ತಾರೆ. ಇವರು ಮರದಲ್ಲಿ ಕೆತ್ತಿ ರಚಿಸಿರುವ ಒಂದು ಮುದ್ರಣ ಯಂತ್ರದ ಮಾಡೆಲ್ ಬಹಳ ವಿಶಿಷ್ಟವಾಗಿದೆಯಂತೆ.

ಯಾವುದೇ ಆಡಂಬರವಿಲ್ಲದ ಸಂಕೋಚ ಸ್ವಭಾವದ ಶಂಕರ ನಾರಾಯಣ ಅವರೊಬ್ಬ ಮಲೆನಾಡಿನ ಉತ್ತಮ ಕಲಾವಿದರಾಗಲು ತಕ್ಕ ಪ್ರೇರಣೆ, ಸಹಾಯ ಅವರಿಗೆ ಲಭಿಸಲೆಂದು ಆಶಿಸೋಣವೆ ?

ವೈ. ಗ. ಜಗದೀಶ್,
ಶೃಂಗೇರಿ.

# ಚುನಾವಣೆಯ ಪಾಠಗಳು : ಒಂದು ವಿಶ್ಲೇಷಣೆ

2ನೇ ಪುಟದಿಂದ)

**ಎರಡು ಪಕ್ಷಗಳಿಗೂ ಪಾಠ**

ಅಂತೂ ಈ ಬಾರಿಯ ಫಲಿತಾಂಶಗಳು ಷ್ಟು ದಿನ ಆಳಿದವರು ಹಾಗೂ ಈಗ ಆಡ ತ ವಹಿಸಿಕೊಳ್ಳುತ್ತಿರುವವರು—ಈ ಇಬ್ಬ ಗೂ ಒಳ್ಳೆಯ ಪಾಠಗಳನ್ನು ತೆರೆದಿಟ್ಟಿವೆ. ವುಗಳನ್ನು ಅರ್ಥಮಾಡಿ ಅರಗಿಸಿಕೊಂಡು ದರಂತೆ ನಡೆಯುವುದು ಅಥವಾ ಎಂದಿ ತೆ ತಮ್ಮ ಮತ್ತು ತಮ್ಮವರ ಹೊಟ್ಟೆ ಳಿಸಿಕೊಳ್ಳುತ್ತ ಪುನಃ ಕಸದ ಬುಟ್ಟಿಗ ರುವುದು— ಈ ಬಾರಿ ಗೆದ್ದವರಿಗೆ ಉಳಿ ರುವುದು ಇವೆರಡರಲ್ಲಿ ಯಾವುದಾದರೊಂ ದಾರಿ ಮಾತ್ರ.

**ಶೃಂಗೇರಿ ಕ್ಷೇತ್ರಕ್ಕೆ ಬಂದರೆ**

ಈ ರಾಷ್ಟ್ರೀಯ ಮತ್ತು ರಾಜ್ಯ ಮಟ್ಟದ ಠಗಳು ಶೃಂಗೇರಿ ಕ್ಷೇತ್ರಕ್ಕೂ ಅನ್ವಯಿ ತ್ತವೆ. ಇಲ್ಲಿ ಶಾಮಣ್ಣ 13 ಸಾವಿರ ಮತ ಪ್ರಚಂಡ ಬಹುಮತವನ್ನೇನೋ ಗಳಿಸಿ ದ್ದಾರೆ. ಆದರೆ, ಅಕಸ್ಮಾತ್ ಜನತಾ ಕ್ಷದಿಂದ ಪ್ರಕಾಶ್ ಮತ್ತು ಪಕ್ಷೇತರ ಗಿ ರಾಮಪ್ಪಯ್ಯ ಸ್ಪರ್ಧಿಸಿದ್ದಿಲ್ಲವಾದರೆ? ಮ್ಯುನಿಸ್ಟ್ ಅಭ್ಯರ್ಥಿ ಸೇವಿಯರ್ ಗಳಿ ದ 6 ಸಾವಿರ ಓಟಿನಲ್ಲೂ ಹೆಚ್ಚಿನಂಶ ಗೋವಿಂದಗೌಡರಿಗೆ ಸೇರಬೇಕಿದ್ದ ಮತಗಳೇ ಬುದನ್ನೂ ಸೇರಿಸಿ ಲೆಕ್ಕ ಹಾಕಿದರೆ, ಮಣ್ಣನವರ ಗೆಲುವು' ಎನ್ನುವುದಕ್ಕಿಂತ ೋವಿಂದ ಗೌಡರ ಸೋಲು' ಎಂಬುದೇ ಷ್ಟು ಸರಿಯಾಗಿ ಕಾಣುತ್ತದೆ.

ಶಾಮಣ್ಣನವರ ಗೆಲುವನ್ನು ಲಘುವಾಗಿ ಣುವುದು ಈ ಮಾತಿನ ಅರ್ಥವಲ್ಲ. ವರೂ ಲೆಕ್ಕಾಚಾರ ಲೆಕ್ಕಾಚಾರವೇ ನೇ? ಶಾಮಣ್ಣ ಇದನ್ನು ನೆನಪಿಟ್ಟು ಂಡಷ್ಟೂ ಅವರಿಗೇ ಒಳಿತು.

**ಸಮಸ್ಯೆಗಳು, ಅಪಾಯಗಳು**

ವಿನೂ ಇಲ್ಲದ ನಿ ಕ್ಷಿತ ಜನರ ಕನಿಷ್ಠ ಶ್ಯಕತೆಗಳಾದ ಸೂರು, ನೀರು, ಭೂಮಿ, ನ್‌ಗಳ ಸಮಸ್ಯೆ ಒಂದೆಡೆಯಾದರೆ, ಸ್ವಲ್ಪ ಉಳ್ಳ ರೈತಾಪಿ ಮತ್ತು ಮಧ್ಯಮರ ಸಮಸ್ಯೆಗಳೂ (ರಸ್ತೆ, ಸೇತುವೆ, ನೀರಾವರಿ, ಸಂಬಳ, ಉದ್ಯೋಗ, ಇತ್ಯಾದಿ) ವಿಪುಲವಾಗಿವೆ. ಇವುಗಳ ಪರಿಹಾರಕ್ಕೇ ಐದು ವರ್ಷ ಸಾಲದು. ಹಾಗಿರುವಾಗ ನೂತನ ಶಾಸಕರ ಬೆಂಬಲಿಗರು, ಹಿತೈಷಿಗಳು, ಸೆಂಟರಿಷ್ಟರು-ಇಂಥವರ ಆಕಾಂಕ್ಷೆಗಳೇ ಮೊದಲ ಸಾಲು ಹಿಡಿದರೆ ಕಷ್ಟ.

ಜೊತೆಗೆ ಎಲ್ಲ ಬಗೆಯ ದುಷ್ಟ-ಕೆಟ್ಟ ಗುಂಪುಗಳೂ—ಲಂಚಕೋರ ನೌಕರ ವರ್ಗ, ಗಂಧ, ನಾಟ ಕಳ್ಳ ಸಾಗಣೆಯವರು, ಕಾಳಸಂತೆಯವರು, ಪುಂಡು ಪೋಕರಿಗಳು ಮುಂತಾದವರೆಲ್ಲ—ಕಾಂಗ್ರೆಸ್ ಆಳ್ವಿಕೆ ಬರುವುದನ್ನೆ ಕಾದುಕೊಂಡಿದ್ದಾರೆ. ಜನತಾ ಆಳ್ವಿಕೆಯಲ್ಲಿ ಇವು ಇರಲಿಲ್ಲವೆಂದಲ್ಲ. ಈ ಕ್ಷೇತ್ರದ ಮಟ್ಟಿಗಂತೂ, ನೌಕರಶಾಹಿಯ ಭ್ರಷ್ಟಾಚಾರವೊಂದು ಬಿಟ್ಟರೆ, ಮಿಕ್ಕ ವಿಚಾರಗಳಲ್ಲಿ ಎಷ್ಟೋ ಹದ್ದುಬಸ್ತು ಇತ್ತು ಎಂಬುದು ಸುಳ್ಳಲ್ಲ. ಕಾಂಗ್ರೆಸ್ಸಿನವರಿಗೆ ಈ ಮಾತು ಕಹಿಯಾಗಿ ಕಂಡರೂ, ಅವರಿಗದು ತಿಳಿಯದ್ದೂ ಅಲ್ಲ. **ಗೌಡರ ಕಿವಿ, ಬಾಯಿ**...

ಗೋವಿಂದ ಗೌಡರಿಗೂ ಪಾಠಗಳಿವೆ. ಅವರ ಬಗ್ಗೆ ಸಹಾನುಭೂತಿ ಇರುವಂತೆಯೇ ವಿರೋಧಕ್ಕೂ ಕಮ್ಮಿಯಿಲ್ಲ. ಅವರ ಕಿವಿ ಮತ್ತು ಬಾಯಿ ಸಾಕಷ್ಟು ಕೆಟ್ಟ ಹೆಸರು ಗಳಿಸಿವೆ ಜನರ ನಂಬಿಕೆ ಕಳಕೊಂಡವರೂ ಅವರ 'ಆಪ್ತಸಲಹೆಗಾರ'ರಾಗಿ, ಅವರ ಕಿವಿಗೆ 'ಹಿತ್ತಾಳೆ ಕಿವಿ' ಎಂಬ ಹೆಸರು ದೊರಕಿಸಿ ಕೊಟ್ಟಿದ್ದಾರೆ ಬಾಯಿಯಂತೂ, ಕೈಗಳು ಒಳ್ಳೆಯ ಕೆಲಸ ಮಾಡುವಾಗಲೂ ತಾನು ಸುಮ್ಮನಿದ್ದುದಿಲ್ಲ. "ನೀವೆಲ್ಲ ಕಾಂಗ್ರೆಸ್ಸಿಗೆ ಓಟು ಹಾಕುವವರು" ಎಂದೋ "ನಿಮ್ಮೂರಲ್ಲಿ ನಮಗೆ ಖಾಲಿ ಪೆಟ್ಟಿಗೆ ಕಳಿಸಿದವರು" ಎಂದೋ ಜರಿದು, "ನಿಮಗೇಕೆ ಕೆಲಸ ಮಾಡಿ ಕೊಡಬೇಕು?" ಎಂದು ಕೇಳುತ್ತಿದ್ದುದು ಎಲ್ಲ ಕಡೆಗಳಲ್ಲೂ ಕೇಳಿ ಬರುವ ಅಪವಾದ.

ಕೆಲವೆಡೆಯಂತೂ, ಅಕ್ಷಿನ ಯಾರೋ ಒಬ್ಬಿಬ್ಬ ಮುಖಂಡರ ಅಥವಾ ಕಾರ್ಯಕರ್ತರ ಮೇಲಿನ ಸೇಡಿನಿಂದ ಆ ಊರಿನ ಕೆಲಸ ಕಾರ್ಯಗಳನ್ನೇ ಆಗಗೊಡದ ಉದಾಹರಣೆಗಳೂ ಕೇಳ ಬರುತ್ತವೆ. ಕೈ ಮತ್ತು ಮನಸ್ಸು ಸ್ವಚ್ಛವಿಟ್ಟುಕೊಂಡು, ರಾಜ್ಯದ ಕೈ ನಡೆಯುತ್ತಿದ್ದಾಗ ಸಾಕಷ್ಟು ದೊಡ್ಡ ಪ್ರಮಾಣದಲ್ಲೇ ಕಾಮಗಾರಿಗಳನ್ನು ಮಾಡಿಸಿಯೂ ಗೌಡರು ಈ ರೀತಿ ಅಪಾರ ಸಂಖ್ಯೆಯಲ್ಲಿ ವಿರೋಧಿಗಳನ್ನು ಕಟ್ಟಿಕೊಂಡಿದ್ದನ್ನು ಅವರ ಕಡೆಯವರೂ ಅವರ ಎದುರು ಪಕ್ಷದವರೂ ಗಣನೆಗೆ ತೆಗೆದುಕೊಳ್ಳುವುದು ಯೋಗ್ಯ

ಬಡ ವರ್ಗಗಳವರ ಕೆಲಸದಲ್ಲೂ ಗೌಡರ ವೈಫಲ್ಯ ಗಮನಾರ್ಹ. ಸರ್ಕಾರದ ಕೆಲವು 'ಉಚಿತ'ಗಳ ಹೊರತು, ಭೂ ರಹಿತರ, ಕೂಲಿ-ಕಾರ್ಮಿಕರ ಬಗ್ಗೆ ಶಾಶ್ವತವಾದ ಕೆಲಸಗಳೇನೂ ಆಗಿಲ್ಲ. ಅವರ ಕಾರ್ಯಕರ್ತರೇ ಹೇಳುವಂತೆ, "ಶಾಸಕರ ಮಟ್ಟದಲ್ಲಿ ಅವರ ಕೆಲಸದಲ್ಲಿ ಅವರ ಬಗ್ಗೆ ಎರಡು ಮಾತಿಲ್ಲ; ಏನಿದ್ದರೂ ಮಂಡಲ ಪಂಚಾಯ್ತಿ, ಬಿಡಿಓ ಆಫೀಸ್ ಮಟ್ಟದಲ್ಲೇ ಅವರು ಕೆಟ್ಟ ಹೆಸರು ತಗೊಂಡದ್ದು"

ಇಷ್ಟಾಗಿಯೂ, ಮೇಲೆ ಹೇಳಿದಂತೆ, ಗೆಲ್ಲುವ ಕುದುರೆ ಅವರೇ ಆಗಿದ್ದರು ಎಂಬುದನ್ನು ಶಾಮಣ್ಣನವರ ಗಮನಕ್ಕಾಗಿ, ಮೇಲಿನ ಎಲ್ಲ ಅಂಶಗಳ ಜೊತೆ ಮತ್ತೊಮ್ಮೆ ಜ್ಞಾಪಿಸಬಯಸುತ್ತೇನೆ.

—ಸಿರಿಮನೆ ನಾಗರಾಜ್.

## ಆಕಾಶವಾಣಿ ರಾ। ವಿಜ್ಞಾನ ಪರೀಕ್ಷೆಯಲ್ಲಿ ಬಹುಮಾನ

ಕೊಪ್ಪ: ಆಕಾಶವಾಣಿ ಹಾಗೂ ರಾಷ್ಟ್ರೀಯ ವಿಜ್ಞಾನ ಮತ್ತು ತಂತ್ರಜ್ಞಾನ ಸಂವಹನ ಮಂಡಳಿಗಳು ಸಂಯುಕ್ತವಾಗಿ ಆಕಾಶವಾಣಿಯಲ್ಲಿ ಪ್ರಸಾರ ಮಾಡಿದ 'ವಿಜ್ಞಾನ ವಿಕಾಸ ಮಾಲಿಕೆ' ಆಧಾರದಲ್ಲಿ ನಡೆದ ರಾಷ್ಟ್ರೀಯ ಮಟ್ಟದ ಪರೀಕ್ಷೆಯಲ್ಲಿ ಕೊಪ್ಪ ಸರಕಾರೀ ಹೈಸ್ಕೂಲ್ ವಿದ್ಯಾರ್ಥಿ ಬಿ. ರಾಜೀವ (ಎಂ. ಆರ್. ಭಾಸ್ಕರ್ ಅವರ ಮಗ) ಮತ್ತು ಇದೇ ಶಾಲೆಯ [illegible] (ಸ್ಟ್ಯಾಗ್ ಟೈಲರ್ಸ್‌ನ [illegible] ಅವರ [illegible]) ಇವರುಗಳು ಪ್ರಶಸ್ತಿ ಪತ್ರ ಹಾಗೂ ಒಂದು ಕ್ಯಾಲ್ಕ್ಯುಲೇಟರ್ ಬಹುಮಾನ [illegible] ಕೊಪ್ಪ ತಾ। ನಿಂದ [illegible] ಬಹುಮಾನ ಪಡೆದವರೆಂದು [illegible]

## ಜಾತಿ, ಹಣ-ಹೆಂಡದ ಭ್ರಷ್ಟತೆ: ಮತದಾರರ ಪ್ರಜ್ಞೆಯೇ ಮದ್ದು

ಚಿಕ್ಕಮಗಳೂರು : ಮೂಡಿಗೆರೆ ವಿಧಾನಸಭಾ ಕ್ಷೇತ್ರದಿಂದ ಚುನಾವಣೆಗೆ ಸ್ಪರ್ಧಿಸಿ ಸೋತಿರುವ ದಲಿತ ಸಂಘರ್ಷ ಸಮಿತಿಯ ಎಂ. ಡಿ. ಗಂಗಯ್ಯ ತನಗೆ ಬೆಂಬಲ, ಸಹಕಾರ ನೀಡಿದ ಎಲ್ಲರಿಗೂ ಕೃತಜ್ಞತೆ ಸಲ್ಲಿಸುತ್ತ, ಸೋಲು – ಗೆಲುವುಗಳನ್ನು ಸಮಾನವಾಗಿ ಸ್ವೀಕರಿಸುವುದಾಗಿ ತಿಳಿಸಿದ್ದಾರೆ.

ಇಂದಿನ ಚುನಾವಣೆ ವ್ಯವಸ್ಥೆ ಇನ್ನೂ ಕೂಡ ಜಾತಿ, ಹಣ, ಹೆಂಡಗಳ ಸುಳಿಯಲ್ಲೇ ಭ್ರಷ್ಟಗೊಂಡಿರುವುದಕ್ಕೆ ಮತದಾರರನ್ನು ಪ್ರಜ್ಞಾವಂತರನ್ನಾಗಿ ಮಾಡುವುದೊಂದೇ ದಾರಿಯಾಗಿದ್ದು, ಈ ಕಾರ್ಯದಲ್ಲಿ ಎಲ್ಲ ವಿಚಾರವಂತರೂ ಸಹಕಾರಿಗಳಾಗಬೇಕೆಂದು ವಿನಂತಿಸಿದ್ದಾರೆ.

## ಪಶು ವೈದ್ಯಕೀಯ ಶಿಬಿರ ಮತ್ತು ತಜ್ಞರಿಂದ ಭಾಷಣ

ಶೃಂಗೇರಿ: 13-12-89ನೇ ಬುಧವಾರ ಬೆಳಿಗ್ಗೆ 9-00ರಿಂದ ಮಧ್ಯಾಹ್ನ 2-00 ಗಂಟೆಯವರೆಗೆ **ಕೆರೆಕಟ್ಟೆ ಕೃಷಿ ಚಿಕಿತ್ಸಾಲಯದ** ಆವರಣದಲ್ಲಿ ಸಿಂಡಿಕೇಟ್ ಬ್ಯಾಂಕ್ ವತಿಯಿಂದ ಪಶು ಸಂಗೋಪನೆ, ಪಶು ವೈದ್ಯಕೀಯ ಸೇವಾ ಶಿಬಿರ ಮತ್ತು ತಜ್ಞರಿಂದ ಉಪನ್ಯಾಸಗಳನ್ನು ಏರ್ಪಡಿಸಲಾಗಿದೆ. ಹಸು, ಎಮ್ಮೆ, ಎತ್ತು, ಕೋಣ, ಕುರಿ, ಮೇಕೆ, ಕೋಳಿ, ಮತ್ತಿತರ ಪ್ರಾಣಿಗಳ ಆರೋಗ್ಯ ಪರೀಕ್ಷೆ ಹಾಗೂ ಸ್ಥಳದಲ್ಲಿಯೇ ಉಚಿತ ಚಿಕಿತ್ಸೆ, ಕೃತಕ ಗರ್ಭಧಾರಣೆ, ಕಸಿ ಮಾಡುವುದು, ನಿರೋಧಕ ಚುಚ್ಚು ಮದ್ದು ಮುಂತಾದುವನ್ನು ನುರಿತ ವೈದ್ಯರು ನೆರವೇರಿಸುವರು. ಹಾಗೂ ಆರೋಗ್ಯವಂತ ಉತ್ತಮ ರಾಸುಗಳಿಗೆ ಬಹುಮಾನ ನೀಡಲಾಗುವುದು.

ಗ್ರಾಮೀಣ ಗ್ರಾಹಕರು ಈ ಅವಕಾಶದ ಪೂರ್ಣ ಲಾಭ ಪಡೆದುಕೊಳ್ಳಬೇಕಾಗಿ ಕೋರಲಾಗಿದೆ.

## ಮಹಿಳೆಯರಿಗೆ ಯೋಗಾಸನ ಶಿಬಿರ ಮತ್ತು 'ಮನೆ ಮದ್ದು'

ಕೊಪ್ಪ : ಇಲ್ಲಿನ ಮಹಿಳಾ ಸಮಾಜ ಮತ್ತು ಪ್ರಬೋಧಿನಿ ಮಾತೃ ಮಂಡಳಿ ಆಶ್ರಯದಲ್ಲಿ ಡಿ. 10 ರಿಂದ 30 ರವರೆಗೆ ಪ್ರತಿ ದಿನ ಸಂಜೆ 5ರಿಂದ 6 ರವರೆಗೆ ಮಹಿಳೆಯರಿಗಾಗಿ ತಜ್ಞ ಕಾರ್ಯಕರ್ತೆಯರಿಂದ ಯೋಗಾಸನ ಶಿಬಿರ ಮತ್ತು ಮನೆ ಮದ್ದು ಕುರಿತು ಮಾಹಿತಿ–ಮಾರ್ಗದರ್ಶನ ಕಾರ್ಯಕ್ರಮ ಏರ್ಪಡಿಸಲಾಗಿದೆ.

## ಮೇರುತಿ ಮತ್ತು ಕೊಪ್ಪ ಜೇಸೀ ಸಪ್ತಾಹ

ಕೊಪ್ಪ : ಇಲ್ಲಿನ ಮತ್ತು ಬಿಳಾಲುಕೊಪ್ಪದ ಜೂನಿಯರ್ ಛೇಂಬರ್‌ಗಳ ವಾರ್ಷಿಕ ಸಪ್ತಾಹದ ಕೆಲವು ಮುಖ್ಯ ಕಾರ್ಯಕ್ರಮಗಳು ಹೀಗಿವೆ.

**ಬಿಳಾಲುಕೊಪ್ಪ**

ಡಿ. 11 ಸೋಮವಾರ ಮ 2 ಗಂಟೆಗೆ ಕಾಫಿ ಸಂಶೋಧನಾ ಮಂಡಳಿ ತಜ್ಞರಿಂದ ಉಚಿತ ಮಣ್ಣು ಪರೀಕ್ಷೆ, ಡಿ. 13 ಸಂಜೆ 6.30ಕ್ಕೆ ಪರಿಸರ ಸಂರಕ್ಷಣೆ ಮತ್ತು ವನ್ಯ ಜೀವಿಗಳ ಬಗ್ಗೆ ಚಲನ ಚಿತ್ರ ಪ್ರದರ್ಶನ, ಡಿ. 15 ಮಧ್ಯಾಹ್ನ ಪ್ರತಿಭಾ ಪ್ರದರ್ಶನ, ಸಂಜೆ 7 30ಕ್ಕೆ ಮುಕ್ತಾಯ ಸಮಾರಂಭ, ಮುಖ್ಯ ಅತಿಥಿಗಳು : ತಹಸೀಲ್ದಾರ್ ಜೆ. ಎಸ್. ನಾಯಕ್ ಮತ್ತು ಸಿರಿಮನೆ ನಾಗರಾಜ್. ಪ್ರತಿ ಸಂಜೆ ಮನರಂಜನಾ ಕಾರ್ಯಕ್ರಮಗಳು.

**ಕೊಪ್ಪ**

ಡಿ. 10, ಭಾನುವಾರ ದೂರದರ್ಶನ ಮಾದರಿಯ ಕ್ವಿಜ್ ಸ್ಪರ್ಧೆ, ಡಿ. 11 ಸೋಮವಾರ ಮಕ್ಕಳ ಆರೋಗ್ಯ ತಪಾಸಣಾ ಶಿಬಿರ ಮತ್ತು ಆರೋಗ್ಯವಂತ ಶಿಶು ಸ್ಪರ್ಧೆ, ಡಿ. 12 ಜನವಾಣಿ: ಅರಣ್ಯ ಇಲಾಖೆ, ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಕೆ. ವಿ. ಮಂ., ಪುರಸಭೆ ಮತ್ತು ಶಂಕರ್ ಸಾರಿಗೆ ಸಂಸ್ಥೆ—ಇವರೊಂದಿಗೆ ಸಾರ್ವಜನಿಕ ಸೇವೆಯ ಬಗ್ಗೆ ವಿಚಾರ ವಿನಿಮಯ, ಡಿ. 15 ಶುಕ್ರವಾರ ಸಂಜೆ 6ಕ್ಕೆ ಮುಕ್ತಾಯ ಸಮಾರಂಭ, ಅತಿಥಿಗಳು : ಡಾ॥ ರಾಮಚಂದ್ರಪ್ಪ ಮತ್ತು ನೊ. ಸ್ಕಿ. ಶಿವೇಗೌಡ, ಪ್ರತಿ ಸಂಜೆ ಮನರಂಜನಾ ಕಾರ್ಯಕ್ರಮಗಳು.

## ಕೊಪ್ಪ ತಾಲ್ಲೂಕು ಯುವಜನ ಮೇಳ

ಹರಿಹರಪುರ : ಕೊಪ್ಪ ತಾಲ್ಲೂಕು ಯುವಜನ ಮೇಳ ಇಲ್ಲಿನ ಕಿರಿಯ ಕಾಲೇಜು ಆವರಣದಲ್ಲಿ ಇದೇ ತಿಂಗಳ 29, 30 ಮತ್ತು 31 ರಂದು ನಡೆಯಲಿದೆ ಎಂದು ತಾ। ಯುವಜನ ಒಕ್ಕೂಟದ ಕಾರ್ಯದರ್ಶಿ ಎಸ್. ಎ. ರಾಮಸ್ವಾಮಿ ತಿಳಿಸಿದ್ದಾರೆ.

## ಕವನ ಆಹ್ವಾನ

ಶಿವಮೊಗ್ಗ : ಸಹಕಾರಿ ಸೆಲೆಯಲ್ಲಿ ಉದಯೋನ್ಮುಖ ಬರಹಗಾರರ 'ತೆರೆದ ಹೃದಯ' ಮತ್ತು 'ಬೆಳೆವ ಸಿರಿ' ಕವನ ಸಂಕಲನಗಳನ್ನು ಹೊರ ತಂದಿರುವ ಇಲ್ಲಿನ ಹೊಸೂ[ರು] ಪ್ರಕಾಶನ ಸದ್ಯದಲ್ಲೇ 'ಬೇವು - ಬೆಲ್ಲ' ಎಂಬ ಕವನ ಸಂಕಲನವೊಂದನ್ನು ಹೊರ ತರಲು ಯೋಜಿಸಿ, ಕವನಗಳನ್ನು ಆಹ್ವಾನಿಸಿದೆ

ಕವನಗಳು 25 ಸಾಲಿಗೆ ಮೀರಬಾರದು. ಪ್ರತಿ ಕವನಕ್ಕೆ 35 ರೂ. ಗಳನ್ನು ಕಳಿಸಬೇಕು. ಕಡೇ ದಿನಾಂಕ. ಡಿಸೆಂಬರ್ 30. ವಿಳಾಸ : ರಾಘವೇಂದ್ರ, ಹೊಸೂ[ರು] ಮುದ್ರಣ ಮತ್ತು ಪ್ರಕಾಶನ, ಹಳೇ ಅಂ[ಚೆ] ಕಛೇರಿ ರಸ್ತೆ, ಶಿವಮೊಗ್ಗ.

## ಕಾಫಿ ಬಿತ್ತನೆ ಬೀಜ ಮತ್ತು ಸಸಿಗಳ ಖಾಸಗಿ ಖರೀದಿ ಬಗ್ಗೆ ತಿಳುವಳಿಕೆ

ಚಿಕ್ಕಮಗಳೂರು : ಕಾಫಿ ಸಂಶೋಧನಾ ಇಲಾಖೆಯು ಈ ಹಿಂದಿನಂತೆ ಈಗಲೂ ಸಹ, ಕಾಫಿ ಸಂಶೋಧನಾ ಕೇಂದ್ರಗಳು ಮತ್ತು ಕಾಫಿ ಕೃಷಿ ಪ್ರದರ್ಶನ ಕ್ಷೇತ್ರಗಳಲ್ಲದೆ, ಕೆಲವು ಖಾಸಗಿಯವರ ತೋಟಗಳಲ್ಲಿ ಇಲಾಖೆಯ ವಿಜ್ಞಾನಿಗಳ ನೇರ ಉಸ್ತುವಾರಿಯಲ್ಲಿ ಸಂಗ್ರಹಿಸಿದ ನಿಖರವಾದ ಬಿತ್ತನೆ ಬೀಜಗಳನ್ನು ವಿಸ್ತರಣಾ ಇಲಾಖೆಯ ಮೂಲಕ ಬೆಳೆಗಾರರಿಗೆ ಸರಬರಾಜು ಮಾಡುತ್ತಿದೆ.

ಆದರೆ ಕೆಲವು ಖಾಸಗಿ ತೋಟಗಳಲ್ಲಿ ಕಾಫಿ ಬಿತ್ತನೆ ಬೀಜ ಮತ್ತು ಸಸಿಗಳನ್ನು ಮಾರಾಟ ಮಾಡುವ ಬಗ್ಗೆ ಜಾಹೀರಾತುಗಳು ಕಾಫಿ ಸಂಶೋಧನಾ ಇಲಾಖೆಯ ಗಮನಕ್ಕೆ ಬಂದಿದ್ದು ಈ ರೀತಿ ಖಾಸಗಿ ತೋಟಗಳಿಂದ ಬೆಳೆಗಾರರು ಪಡೆಯುವ ಬಿತ್ತನೆ ಬೀಜ, ಸಸಿಗಳ ತಳಿಗಳ ನಿಖರತೆ ಮತ್ತು ಅವುಗಳ ಮುಂದಿನ ಪ್ರವೃತ್ತಿಗಳ ಬಗ್ಗೆ ಕಾಫಿ ಸಂಶೋಧನಾ ಇಲಾಖೆ ಯಾವುದೇ ಜವಾಬ್ದಾರಿ ಹೊರುವುದಿಲ್ಲವೆಂದು ಕಾಫಿ ಸಂಶೋಧನಾ ಇಲಾಖೆಯ ನಿರ್ದೇಶಕರು ಬೆಳೆಗಾರರಿಗೆ ತಿಳುವಳಿಕೆ ನೀಡಿದ್ದಾರೆ.

## ಪೇಟೆ ಧಾರಣೆ

**ಅಡಿಕೆ**

ಶಿವಮೊಗ್ಗ : 8-12-1989
ಸರಕು : 3189-3679
ಬೆಟ್ಟೆ : 2520-2813
ಗೊರಬಲು : 1500-1680
ಸಾಗರ : 8.12.1989
ಇಡಿ : 2439-2661
ಚಾಲಿ : 2729-2925
ಆಪಿ : 3235-3436
ಸಿಪ್ಪೆ ಗೋಟು : 1399-1587

## ಜಿಲ್ಲಾ ಪ್ರೌಢಶಾಲಾ ಕ್ರೀಡಾಕೂಟ ಯಶಸ್ವಿ

ನರಸಿಂಹರಾಜಪುರ: ಇಲ್ಲಿನ ಸರ್ಕಾರಿ ಕಿರಿಯ ಕಾಲೇಜು ಆಶ್ರಯಲ್ಲಿ ನ. 28, 29 ಮತ್ತು 30ರಂದು ಜಿಲ್ಲಾ ಮಟ್ಟದ ಪ್ರೌಢಶಾಲಾ ಕ್ರೀಡಾಕೂಟ ಯಶಸ್ವಿಯಾಗಿ ನಡೆಯಿತು. ಜಿಲ್ಲಾ ಪರಿಷತ್ ಸದಸ್ಯ ಮೀಗಾ ಚಂದ್ರಶೇಖರ್ ಅಧ್ಯಕ್ಷತೆಯಲ್ಲಿ ಮಧ್ಯಂತರ ಮಂಡಲ ಪ್ರಧಾನರಾದ ಟಿ.ವಿ. ವರ್ಗೀಸ್ ಕ್ರೀಡಾಕೂಟವನ್ನು ಉದ್ಘಾಟಿಸಿದರು

ನ. 30ರಂದು ಚಿಕ್ಕಮಗಳೂರು ಜಿಲ್ಲಾ ಶಿಕ್ಷಣ ಉಪ ನಿರ್ದೇಶಕ ಎಸ್. ಆರ್. ವಿನ್ಸೆಂಟ್ ಅಧ್ಯಕ್ಷತೆಯಲ್ಲಿ ಮುಕ್ತಾಯ ಸಮಾರಂಭವು ಜರುಗಿತು. ವಿಜೇತ ಕ್ರೀಡಾ ಪಟುಗಳಿಗೆ ಜಿಲ್ಲಾ ಪರಿಷತ್ ಸದಸ್ಯೆ ಬಿ. ಸಿ. ಗೀತಾ ಬಹುಮಾನ ವಿತರಿಸಿದರು. ಪ್ರಥಮ ದರ್ಜೆ ಕಾಲೇಜು ಪ್ರಿನ್ಸಿಪಾಲ್ ಎನ್. ಕೆ. ಹಾಲೇಶ್ ಹಾಗೂ ಬಿ ಡಿ ಓ. ಚಿದಾನಂದ ಹೆಗ್ಗಾರ್ ಮುಖ್ಯ ಅತಿಥಿಗಳಾಗಿದ್ದರು. ನವಿಲೂರು ಪ್ರಕಾಶ್ ಸ್ವಾಗತಿಸಿ ಎಚ್. ಕೆ. ಗೋಪಾಲಕೃಷ್ಣ ವಂದಿಸಿದರು.

ಚಿಕ್ಕಮಗಳೂರು ತಾಲ್ಲೂಕು ಸಮಗ್ರ ಪ್ರಶಸ್ತಿಯನ್ನೂ ಕೊಪ್ಪ ತಾಲ್ಲೂಕು 2ನೇ ಸ್ಥಾನವನ್ನೂ ಪಡೆದ ಈ ಕೂಟದ ಬಾಲಕ–ಬಾಲಕಿಯರ ವಿಭಾಗಗಳೆರಡರಲ್ಲೂ ವೈಯಕ್ತಿಕ ಛಾಂಪಿಯನ್‌ಶಿಪ್ ಚಿಕ್ಕಮಗಳೂರಿನ ಪಾಲಾಯಿತು. ಕೊಪ್ಪ, ನ. ರಾ. ಪುರಗಳ ಬಾಲಕ–ಬಾಲಕಿಯರೂ ವಿಪುಲವಾಗಿ ಪ್ರಶಸ್ತಿಗಳನ್ನು ಗಳಿಸಿದರು.

(ವರದಿ : ಮಲೆನಾಡು ನ್ಯೂಸ್)

## ಶೃಂಗೇರಿ ಕ. ಸಾ. ಪ. ರಾಜ್ಯೋತ್ಸವ ಕಾರ್ಯಕ್ರಮ

ಶೃಂಗೇರಿ: ಇಲ್ಲಿನ ಕನ್ನಡ ಸಾಹಿತ್ಯ ಪರಿಷತ್ ಶಾಖೆಯು ರಾಜ್ಯೋತ್ಸವದ ಅಂಗವಾಗಿ ನ. 30ರಂದು ಅನಂತಕೃಷ್ಣ ಭಟ್ ಅಧ್ಯಕ್ಷತೆಯಲ್ಲಿ ಏರ್ಪಡಿಸಿದ್ದ ಸಾಹಿತ್ಯಕ, ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಎಚ್. ಎಲ್. ಸುಬ್ರಮಣ್ಯ ಅವರು, ಮೂಲತಃ ಶೃಂಗೇರಿಯ ಸಮೀಪದ ವಿದ್ಯಾರಣ್ಯಪುರದವರಾದ ಖ್ಯಾತ ಕವಿ ಪ್ರೊ॥ ಎಸ್. ವಿ. ಪರಮೇಶ್ವರ ಭಟ್ಟರನ್ನು ಕುರಿತು ವಿಶೇಷ ಉಪನ್ಯಾಸ ಮಾಡಿದರು.

ಕನ್ನಡ ನಾಡು, ನುಡಿ, ಪರಂಪರೆ ಕುರಿತು ಶ್ರೀಮತಿ ಶೈಲಜಾ ಹೆಗ್ಡೆ ಮಾತನಾಡಿದರು. ಕ.ಸಾ.ಪ ಗೌರವಾಧ್ಯಕ್ಷ ಡಾ॥ ಹುಲ್ಸೆ ಮಂಜಪ್ಪಗೌಡ ಸ್ವಾಗತಿಸಿದರು. ಚೈತನ್ಯ ಯುವಕ ಸಂಘದವರು ಉತ್ತಮ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೀಡಿ[illegible] ಟಿ.ಎಸ್. ವೆಂಕಣ್ಣಯ್ಯ ಕಾರ್ಯ[illegible] ನಿರ್ವಹಿಸಿದರು. ಪರಿಷತ್ ಅಧ್ಯಕ್ಷ [illegible]. ರಾಜಣ್ಣ ವಂದಿಸಿದರು

## ವಾಲಿಬಾಲ್ ಜಯ

ಅಗಳಗಂಡಿ : ಡಿ. 5 ರಂದು ಜಿಲ್ಲಾ ಯುವಜನ ಒಕ್ಕೂಟದ ಆಶ್ರಯದಲ್ಲಿ ಚಿಕ್ಕಮಗಳೂರಿನಲ್ಲಿ ನಡೆದ ಜಿಲ್ಲಾ ಮಟ್ಟದ ವಾಲಿಬಾಲ್ ಕ್ರೀಡಾಕೂಟದಲ್ಲಿ ಇಲ್ಲಿನ ಮಾಧ್ಯಮಿಕ ಮತ್ತು ಪ್ರೌಢಶಾಲೆ ವಿದ್ಯಾರ್ಥಿಗಳು ಜಿಲ್ಲೆಗೆ ಪ್ರಥಮ ಸ್ಥಾನ ಪಡೆದಿದ್ದಾರೆ (ವರದಿ : ಕೆ. ಕಾರಿಯಪ್ಪ)

## ಬಾಳಸಂಗಾತಿ ಬೇಕಾಗಿದ್ದಾರೆ

ಪತ್ರಿಕೋದ್ಯಮ ವೃತ್ತಿಯಲ್ಲಿರುವ ವೈಚಾರಿಕ ನೆಲೆಗಟ್ಟಿನ, ಮಾನವೀಯ ಮೌಲ್ಯಗಳನ್ನು ಪ್ರೀತಿಸುವ ಯುವ[ತಿ]ನಿಗೆ, ಉದ್ಯೋಗದಲ್ಲಿರುವ, 28 ವರ್ಷದೊಳಗಿನ **'ಬಾಳಸಂಗಾತಿ'** ಬೇಕಾಗಿದ್ದಾರೆ. ಸರಳ ವಿವಾಹಕ್ಕೆ ಆದ್ಯತೆ. ಆಸಕ್ತರು ಇತ್ತೀಚಿನ ಭಾವಚಿತ್ರದೊಂದಿಗೆ ಬರೆಯಿರಿ : ಬಾಕ್ಸ್ ನಂ. 5 ಕೇರಾಫ್ 'ಮುಂಜಾವು', ಕೊಪ್ಪ.

## ಶ್ರದ್ಧಾಂಜಲಿ

**ಶ್ರೀ ಶ್ರೀನಿವಾಸ ಗೌಡರು, ಪಣ್ಣಕಲೆ,**
ಇವರ ಹಠಾತ್ ನಿಧನಕ್ಕಾಗಿ ತೀವ್ರ ದುಃಖವನ್ನು ವ್ಯಕ್ತಪಡಿಸುತ್ತಾ, ಅವರ ಆತ್ಮಕ್ಕೆ ಚಿರಶಾಂತಿಯನ್ನು ಕೋರುತ್ತೇನೆ.

**ಸೂರೇಗೌಡ,**
ಪುರಸಭೆ, ಕೊಪ್ಪ.


ರೋಟರ್ಯಾಕ್ಟ್ ಕ್ಲಬ್, ಕೊಪ್ಪ
(ರೋಟರಿ ಕ್ಲಬ್ ಕೊಪ್ಪ, ಇದರ ಅಂಗಸಂಸ್ಥೆ)

ಚೆಸ್ ಮತ್ತು ಕೇರಂ ಟೂರ್ನಮೆಂಟ್

**ದಿನಾಂಕ : 24 ಮತ್ತು 25 ಡಿಸೆಂಬರ್ 1989.**
**ಸ್ಥಳ : ತೋಮರಶೆಟ್ಟಿ ಹಿ.ಪ್ರಾ. ಶಾಲೆ, ಕೆಳಪೇಟೆ, ಕೊಪ್ಪ**
**ಪ್ರವೇಶ ಕಳಿಸಲು ಕೊನೇ ದಿನಾಂಕ : 20-12-1989**
ವಿವರಗಳಿಗೆ : ಕಾರ್ಯದರ್ಶಿ, ರೋಟರ್ಯಾಕ್ಟ್ ಕ್ಲಬ್,
**ಕೇರಾಫ್ ಪ್ರಭು ಸ್ವೀಟ್ಸ್, ಕೊಪ್ಪ.**


ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್, ಅಚ್ಚು : ದೀವಟಿಗೆ ಅಚ್ಚು ಕೂಟ, ಕೊಪ್ಪ.